# ಪಾಂಡುರಂಗ ಪಾರಿಜಾತ

5 ರಾಗ : ಪಾರಜು ತಾಳ : ಛಾಪು

ಪಾಲಿಸೊ ಪಂಢರಿ ಪುರಿರೇಯಾ । ಪಾವನ ಕಾಯಾ ॥ ಪ ॥

ಭೀಮರಥಿಕೂಲ ನಿಲಯಾ । ಪಾಲಿಸೋ ಪಂಢರಿ ಪುರಿರೇಯಾ ।
ಪಾವನ ಕಾಯಾ ॥ ಅ. ಪ. ॥

(ವ್ಯಾಖ್ಯಾನ ಪುಟ ಅವರಣದಲ್ಲಿ 10)

ತರುಣ ತುಲಸಿ ಮಾಲಾ । ತಪ್ತ ಗಾಂಗೇಯ ಚೇಲಾ ।
ಶರಧಿ ತನಯ ಲೋಲಾ । ಶಕ್ವರೀಕಾರಿ ಫಾಲಾ ॥
ಶಿರಿ ಅಜ ಭವ ಮೂಲಾ । ಶುದ್ಧ ಕಾರುಣ್ಯ ಲೀಲಾ ॥
ಪುರಹರ ಸುಖ ಲೀಲಾ । ಪಾಹಿ ಗೋಪಾಲ ಬಾಲಾ ॥ 1 ॥

(ವ್ಯಾಖ್ಯಾನ ಪುಟ ಅವರಣದಲ್ಲಿ 14)

**ಪದ**

ನವಜಲಧರ ನಿಭ ಶ್ಯಾಮಲಾ ಒಪ್ಪಿ ಕೋಮಲಾ ।
ವೈಜಯಂತಿಯ ಮಾಲಾ ।
ರವಿಯಂತೆ ಹೊಳೆವ ಕುಂಡಲ ಹಾರಾ । ಧೃತ ಕೇಯೂರಾ ।
ಕೌಸ್ತುಭ ಮಣಿ ರುಚಿರಾ ।
ದಿವಿಭೂ ಪಾತಾಳ ಲೋಕದಿ ವ್ಯಾಪ್ತಾ । ದೋಷ ನಿರ್ಲಿಪ್ತಾ ।
ವಿಪಶ್ಚಿತ ಜನರಾಪ್ತಾ ।
ಭವ ವನಧಿಗೆ ಕುಂಭ ಸಂಭವಾ । ದೇವರ ದೇವಾ ।
ಧರುಮಾಧ್ವರ ಭಾವಾ । ॥ 1 ॥

(ವ್ಯಾಖ್ಯಾನ ಪುಟ ಅವರಣದಲ್ಲಿ 19)

**ಶ್ಲೋಕ**

ಅಮಿತ ಸುಗುಣ ಧಾಮಾ । ಆತ್ಮ ಭೂ ಪೂರ್ಣ ಕಾಮಾ ।
ಅಮರ ಕುಲ ಲಲಾಮಾ । ಅಬ್ಜ ಧಾಮಾಭಿರಾಮಾ ॥
ಯಮಿ ಕುಲೋದಧಿ ಸೋಮಾ । ಯಜ್ಞಭೃದ್ಯಜ್ಞ ನಾಮಾ ।
ಸಮರ ವಲಯ ಭೀಮಾ । ಸಾತ್ವತಾಂ ಸಾರ್ವಭೌಮಾ ॥ ॥ 2 ॥

(ವ್ಯಾಖ್ಯಾನ ಪುಟ ಅವರಣದಲ್ಲಿ 25)

**ಪದ**

ದಿತಿಜ ಮರ್ದನ ದೀನ ರಕ್ಷಕಾ । ಕರ್ಮ ಸಾಕ್ಷಿಕಾ ।
ಸಂರಕ್ಷಿತ ಸರ್ವ ಲೋಕಾ ।

ವಿತತ ಮಹಿಮ ವಿಶ್ವ ನಾಟಕಾ । ವಕ್ತ್ರ ಘೋಟಕ ।
ಶೋಭಿತ ರತ್ನ ಕಟಕಾ ।
ನುತಿಸುವೆ ನಳಿನ ಜಾಂಡೋದರಾ । ಸರ್ವರಾಧಾರಾ ।
ಸಂತತ ನಿರ್ವಿಕಾರಾ ।
ಮತಿ ಮಂದನಾಗಿ ನಿನ್ನನು ಬಿಟ್ಟೇ । ಮಮತೆಯ ತೊಟ್ಟೇ ।
ಕಾಣೆನೊ ಪುಣ್ಯ ಬಟ್ಟೆ । ॥ 2 ॥

(ವ್ಯಾಖ್ಯಾನ ಪುಟ ಅವರಣದಲ್ಲಿ 35)

**ಶ್ಲೋಕ**

ಜನನ ಮರಣ ದೂರಾ । ಜಂಗಮಾಽಚರ ವಿಹಾರಾ ।
ದನುಜ ವನ ಕುಠಾರಾ । ದೀನ ಮಂದಾರ ಧೀರಾ ॥
ಪ್ರಣತ ಭಯ ವಿಹಾರಾ । ಪ್ರಾಕೃತಾತೀತ ಸಾರ ।
ದಿನಪನಿಭ ಶರೀರಾ । ದುಃಖಿವಾರಿದ ಸಮೀರಾ ॥ 3 ॥

(ವ್ಯಾಖ್ಯಾನ ಪುಟ ಅವರಣದಲ್ಲಿ 45)

**ಪದ**

ವನಧಿ ಬಂಧನ ವನೌಕಸ ನಾಥಾ । ಜಿತಸುರ ಯೂಥ ।
ನಿರ್ಮಲ ಶೃತಿ ಗಾಥಾ ।
ಅನುದಿನದಲಿ ನಂಬಿದೆ ನಿನ್ನಾ । ಪಾಲಿಸು ಎನ್ನಾ ।
ಸಂತತ ಸುಪ್ರಸನ್ನಾ ॥
ಮನ ವಾಕ್ಕಾಯದಿ ಮಾಡಿದ ಕ್ರಿಯಾ । ನಿನ್ನದು ಜೀಯಾ ।
ಕರುಣದಿ ಪಿಡಿ ಕೈಯ್ಯಾ ।
ನೆನೆಯೆ ನಿನ್ನಲ್ಲದೆ ಅನ್ಯರಾ । ದುರ್ಜನ ದೂರಾ ।
ನಂದಗೋಪ ಕುಮಾರಾ ॥ 3 ॥

(ವ್ಯಾಖ್ಯಾನ ಪುಟ ಅವರಣದಲ್ಲಿ 91)

**ಶ್ಲೋಕ**

ವನರುಹ ಭವ ತಾತಾ । ವೀತ ತನ್ಮಾತ್ರ ಭೂತಾ ।
ದ್ಯುನದಿ ಜಲವಿಧೌತಾ । ದಿವ್ಯ ಪಾದಾಂಬು ಜಾತಾ ॥
ಅನಿಲ ತನಯ ಪ್ರೀತಾ । ಅತ್ರಿ ಸದ್ವಂಶ ಜಾತಾ ।
ಅನಿಮಿಷಪಜ ಸೂತಾ । ಅನತೇಷ್ಟಪ್ರದಾತಾ ॥ ॥ 4 ॥

(ವ್ಯಾಖ್ಯಾನ ಪುಟ ಅವರಣದಲ್ಲಿ 99)

ಪದ

ಕರದಂಡ ಧರ ಕಟಿಸ್ಥಿತ ಪಾಣೇ । ಮಂಗಳ ಶ್ರೇಣೇ ।
ಲೋಕೈಕ ಸತ್ರಾಣೇ ।
ಶರಣು ಹೊಕ್ಕರ ಕಾಯ್ವ ಬಿರುದಾಂಕಾ । ಕಾಳಿಂಗನ ಬಿಂಕಾ ।
ಬಿಡಿಸಿದ್ಯೋ ನಿಷ್ಕಳಂಕಾ ।
ಮುರ ಶಿಶುಪಾಲ ಧೇನುಕ ಹಂಸಾ । ವತ್ಸಾಸುರ ಕಂಸಾ ।
ದಂತವಕ್ತ್ರಾದ್ಯರ ಹಿಂಸಾ ॥
ವರನಾಗಿ ಕೊಟ್ಟೆ ಧಾರುಣಿಗಿಷ್ಟಾ । ಸುಜನರ ಕಷ್ಟಾ ।
ಬಿಡಿಸಿದೆಯೋ ಓಜಿಷ್ಟಾ ॥ 4 ॥

(ವ್ಯಾಖ್ಯಾನ ಪುಟ ಅವರಣದಲ್ಲಿ 108)

ಶ್ಲೋಕ

ಶುಭತಮ ಸುಖತೀರ್ಥಾ । ರಾಧ್ಯ ಸಧ್ಯಾನ ಪಾತ್ರಾ ।
ಇಭವರ ರಿಪುಹರ್ತಾ । ವಿಶ್ವ ಜನ್ಮಾದಿ ಕರ್ತಾ ॥
ಅಭಯ ತವ ಪದಾಂಭೋ । ಜಾತ ಯುಗ್ಮ ಪ್ರಸಾದಾ ।
ನಭದನುಪಿತ ದೇಹೀ 1 ನಿಶ್ಚಲಾನಂತ ಪಾಹೀ ॥ ॥ 5 ॥

(ವ್ಯಾಖ್ಯಾನ ಪುಟ ಅವರಣದಲ್ಲಿ 135)

ಪದ

ವಸುಪತಿ ಸುತ ನಳಕೂಬರಾ । ಮಣಿಗ್ರೀವರಾ ।
ತರುಜನ್ಮ ವಿದೂರಾ ।
ವೃಷಭ ಶಕಟ ಬಕ ಭಂಜನಾ । ಜನ ರಂಜನಾ ॥
ನಿರ್ಗುಣ ನಿರಂಜನಾ ।
ವಸುದೇವನಿಗೆ ಮಗನಾಗಿದ್ದೇ । ಬೆಣ್ಣೆಯ ಕದ್ದೇ ।
ಗೋಪರೊಡಗೂಡಿ ಮೆದ್ದೇ ।
ಬಿಸಜಜಾಂಡವ ವದನದೊಳಂದೂ । ಸಜ್ಜನರ ಬಂಧೂ ॥
ತೋರಿದೆ ದಯಾ ಸಿಂಧೂ ॥ 5 ॥

(ವ್ಯಾಖ್ಯಾನ ಪುಟ ಅವರಣದಲ್ಲಿ 140)

ಶ್ಲೋಕ

ನಗಧರ ನಳಿನಾಕ್ಷಾ । ನಾಕನಾಥಾದಿ ಪಕ್ಷಾ ।
ನೃಗ ನರಪತಿ ಶಾಪಾ । ನಿರ್ಹಣಾಕಾರ ಶ್ರೀಪಾ ॥
ಭೃಗು ಮುಖ ಮುನಿ ಗೇಯಾ । ಭೂತನಾಥ ಸಹಾಯಾ ।
ಅಗಣಿತ ಸುಮಹಾತ್ಮ್ಯಾ । ಸರ್ವ ಜೀವಾಂತರಾತ್ಮಾ ॥ ॥ 6 ॥

(ವ್ಯಾಖ್ಯಾನ ಪುಟ ಅವರಣದಲ್ಲಿ 150

ಪದ

ರಜನೀಶ ಬಿಂಬವನುಳುಹಿದಾ-ಮಾಮು ಕಳುಹಿದಾ ।
ಅಹಿತರನಳುಹಿದಾ ।
ದ್ವಿಜನ ಸಹಾನಂತಾಸನ ಪುರಾ । ವೈದೆ ಸತ್ವರಾ ॥
ತೋರಿದೆ ಸತ್ಪುತ್ರಾರಾ ।
ಭುಜಗ ಮಾರ್ಗಣ ರವಿ ನಂದನಾ । ಬಿಡೆ ಶ್ಯಂದನಾ ।
ಒತ್ತಿ ಕುಂತೀ ನಂದನಾ ।
ಮಝುಭಾಪುರೆ ಕಾಯ್ದ ರಣದೊಳು - ಬಾಣನ ತೋಳು ।
ಖಂಡ್ರಿಸಿದ್ಯೋ ಕೃಪಾಳೂ

||

(ವ್ಯಾಖ್ಯಾನ ಪುಟ ಅವರಣದಲ್ಲಿ

ಶ್ಲೋಕ

ಶಫರ ಕಮಠ ಕೋಲಾ । ಶತ್ರುಕಾಶ್ಯಪಿ ಸುಬಾಲಾ ।
ಕುಪತಿ ಅನಿಲ ವ್ಯಾಳಾ ।- ನೀಲಕಂಠಾಸ್ತ್ರಕಾಲಾ ।
ದೃಪದ ತನಯ ಚೇಲಾ । ದೂರ ವರ್ಜಿತ ದುಕೂಲಾ ।
ವಪುಕ್ಷಿತಿಸುರ ಬಾಲಾ । ರಕ್ತಪದ ಭೇದ ಶೀಲಾ

|| 7

ಪದ

(ವ್ಯಾಖ್ಯಾನ ಪುಟ ಅವರಣದಲ್ಲಿ 18

ಕ್ಷೇತ್ರಜ್ಞ ಕ್ಷೇತ್ರನಾಮಕ ಕ್ಷೀರಾ-ಅಬ್ಧಿ । ನಿಜಾಗಾರಾ ।
ನಿರ್ಮಲ ಓಂಕಾರಾ ।
ಮಾತ್ರ ಪ್ರತಿಪಾದ್ಯ ಸ್ವರೂಪಾ । ವರ್ಜಿತ ಪಾಪಾ ।
ಗುರುವೆನಿಪ ಸಾಂದೀಪಾ ।
ಪುತ್ರನ ತಂದ ಪರಾಕ್ರಮಿ । ಎಲ್ಲರ ಸ್ವಾಮಿ ।
ಪರಮ ಪ್ರಿಯಜಾಮಿ ।
ಭಕ್ತಗೊಲಿದು ವಿಶ್ವ ರೂಪವಾ । ತೋರಿ ಚಾಪವಾ ।
ಕೊಟ್ಟು ಕಳದ್ಯೋ ತಾಪವಾ

ಶ್ಲೋಕ

|| 7 ||

(ವ್ಯಾಖ್ಯಾನ ಪುಟ ಅವರಣದಲ್ಲಿ 204)

ಅತಿ ಸುವಿಮಲ ಗಾತ್ರಾ । ಅಖಿಳ ಲೋಕೈಕ ಪಾತ್ರಾ ।
ವೃತತಿಜ ದಳ ನೇತ್ರಾ । ವೃತ್ರಹಾದ್ಯಮರ ಮಿತ್ರಾ ।

ಶ್ರುತಿ ಕಮಲಜ ಸೂತ್ರಾ । ಸ್ತುತ್ಯ ಪಾವನ ಪವಿತ್ರಾs ।
ಪ್ರತಿಹತ ಸುಚರಿತ್ರಾ । ಪಾತು ಲಕ್ಷ್ಮೀ ಕಳತ್ರಾ ॥ 8 ॥

(ವ್ಯಾಖ್ಯಾನ ಪುಟ ಅವರಣದಲ್ಲಿ 220)

**ಪದ**

ಏಳು ಘೂಳಿಯ ಗೆದ್ದ ಯದುಪತೀ । ಸುಪರಂಜ್ಯೋತೀ ।
ನಿನ್ನಯ ದಿವ್ಯ ಖ್ಯಾತೀ ।
ಏಳೇಳು ಜಗದೊಳು ನುತಿಸೋರೂ - ನಿತ್ಯ ಸುಖಿಸೋರು ।
ಆನಂದಾಬ್ಧಿಗತರೂ - ।
ಕೀಳು ಮಾನವ ನಾ ಬಲ್ಲೆನೇ ನಿನ್ನಾ । ನಿರುತಾಪನ್ನಾ ।
ಜನ ಕ್ಲೇಶ ಭಂಜನಾ ।
ತಾಳಿದೆ ನರರೊಳು ನರವೇಷಾ । ಮಂಜುಳ ಭಾಷಾ ।
ಎನ್ನಯ ಅಭಿಲಾಷಾ ॥ 8 ॥

(ವ್ಯಾಖ್ಯಾನ ಪುಟ ಅವರಣದಲ್ಲಿ 237)

**ಶ್ಲೋಕ**

ಹನುಮನುತ ಪಾದಾಬ್ಜಾ - ಹಂಸ ಸಂವಕ್ತ್ರಕುಬ್ಜಾ ।
ತನುವಿಕೃತ ವಿನಾಶಾ । ಕಾಳಿಜಿಹ್ವಾಸು ದೇಶಾ ॥
ದನುಜ ತತಿ ಕರಾಳಾ । ಮತ್ತಪೌಂಢ್ರಾಂತಕಾಲ ।
ಹನುಮ ವಿದುರ ವಂದ್ಯ । ಹೈಮಗರ್ಭಾಂಡ ವಂದ್ಯಾ ॥ 9 ॥

(ವ್ಯಾಖ್ಯಾನ ಪುಟ ಅವರಣದಲ್ಲಿ 248

**ಪದ**

ಇಟ್ಟಿಗೆ ಪೀಠ ಸಂಸ್ಥಿತ ಪಾದಾ । ಮಂಗಳ ಪ್ರದಾ ।
ಶಾಶ್ವತ ಮೋದ ಸುಪದಾ ।
ಕೊಟ್ಟು ಪಾಲಿಸೊ ಅನಿಮಿಷ ತರೂ । ನಿನ್ನಯ ಚಾರು ।
ಮೂರುತಿಯನ್ನ ತೋರೋ ।
ಪುಟ್ಟಲಾರೆನು ಜಗದೊಳು ದಾತಾ । ಎನ್ನಯ ಮಾತಾ ।
ಲಾಲಿಸು ಜಗನ್ನಾಥಾ ।
ವಿಠ್ಠಲ ವೃಂದಾರಕರರಸಾ । ಸಂತತ ಲೇಸಾ ।
ನಿನ್ನವರಿಗೆ ಶ್ರೀಶಾ ॥ 9 ॥ ॥ ಶ್ರೀ ॥

(ವ್ಯಾಖ್ಯಾನ ಪುಟ ಅವರಣದಲ್ಲಿ 258)